## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಹೆಚ್.ಎಸ್ ಗೋಪಿನಾಥ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1414 |
| ಉತ್ತರಿಸಬೇಕಾದ ದಿನಾಂಕ | 09.03.2022 |
| ಉತ್ತರಿಸಬೇಕಾದ ಸಚಿವರು | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯಲ್ಲಿ ಸರ್ಕಾರದಿಂದ ರಾಜೀವ್ ಗಾಂಧಿ ವಸತಿ ನಿಗಮದಿಂದ ವಿವಿಧ ಯೋಜನೆಗಳ ಅಡಿಯಲ್ಲಿ ನೀಡಿರುವ ಇದುವರೆಗೂ ಹಂಚಿಕೆಯಾಗಿರುವ ವಸತಿಗಳ ಫಲಾನುಭವಿಗಳ ಸಂಖ್ಯೆ ಎಷ್ಟು; | ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯಲ್ಲಿ ರಾಜೀವ್ ಗಾಂಧಿ ವಸತಿ ನಿಗಮದ ಮೂಲಕ ಅನುಷ್ಠಾನಗೊಳಿಸಿರುವ ವಿವಿಧ ಯೋಜನೆಗಳ ಅಡಿಯಲ್ಲಿ 2010-11ನೇ ಸಾಲಿನಿಂದ ಇಲ್ಲಿಯವರೆಗೆ ಒಟ್ಟು **1,19,595** ಮನೆಗಳನ್ನು ಫಲಾನುಭವಿಗಳಿಗೆ ಹಂಚಿಕೆ ಮಾಡಲಾಗಿದೆ.<br>ಯೋಜನೆವಾರು ವಿವರ ಈ ಕೆಳಕಂಡಂತಿದೆ: |

| ಯೋಜನೆ | ಆಯ್ಕೆ | ಪೂರ್ಣ | ಪ್ರಗತಿ | ಪ್ರಾರಂಭವಾಗದ ಮನೆಗಳು | ರದ್ದಾದ ಮನೆಗಳು |
|---|---|---|---|---|---|
| ಬಸವ ವಸತಿ ಯೋಜನೆ | 26208 | 13115 | 1867 | 7 | 11219 |
| ದೇವರಾಜು ಅರಸು ವಸತಿ (ಗ್ರಾ) | 260 | 52 | 21 | 8 | 179 |
| ಡಾ\|\|ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ) | 6610 | 3247 | 732 | 1 | 2630 |
| ಪ್ರಧಾನ ಮಂತ್ರಿ ಆವಾಸ್ (ಗ್ರಾ) | 8786 | 5084 | 537 | 8 | 3157 |
| ದೇವರಾಜು ಅರಸು ವಸತಿ (ನ) | 6 | 1 | 2 | 0 | 3 |
| ಡಾ\|\|ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ನ) | 641 | 275 | 104 | 0 | 262 |
| ವಾಜಪೇಯಿ ನಗರ ವಸತಿ | 233 | 108 | 52 | 0 | 73 |
| ಪ್ರಧಾನ ಮಂತ್ರಿ ಆವಾಸ್ (ನ) AHP-KSDB *(ಪ್ರಗತಿಯಲ್ಲಿರುವ ಮನೆಗಳು) | 13244 | 7093 | 6151 | 0 | 0 |
| AHP-1Lakh –RGHCL** (ಪ್ರಗತಿಯಲ್ಲಿರುವ ಮನೆಗಳು) | 60831 | 0 | 60831 | 0 | 0 |
| AHP-ULB*** (ಪ್ರಗತಿಯಲ್ಲಿರುವ ಮನೆಗಳು) | 1956 | 473 | 1483 | 0 | 0 |
| ಪ್ರಧಾನ ಮಂತ್ರಿ ಆವಾಸ್ (ನ) BLC –Non convergence | 820 | 34 | 55 | 731 | 0 |
| ಒಟ್ಟು | **119595** | **29482** | **71835** | **755** | **17523** |

ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಒಟ್ಟು 19,727 ಮನೆಗಳ ಪೈಕಿ, 13,244 ಮನೆಗಳಿಗೆ ಫಲಾನುಭವಿಗಳು ಆಯ್ಕೆಯಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಉಳಿದ 6,483 ಮನೆಗಳಿಗೆ ಫಲಾನುಭವಿಗಳ ಆಯ್ಕೆ ಬಾಕಿಯಿರುತ್ತದೆ.

| | | |
|---|---|---|
| | | ರಾಜೀವ್ ಗಾಂಧಿ ವಸತಿ ನಿಗಮದಿಂದ ಅನುಷ್ಠಾನಗೊಳಿಸುತ್ತಿರುವ AHP-1Lakh ಯೋಜನೆಯಡಿ 60,831 ಮನೆಗಳ ಕಾಮಗಾರಿ ಪ್ರಗತಿಯಲ್ಲಿದೆ. ಉಳಿದ 39,169 ಮನೆಗಳ ನಿರ್ಮಾಣ ಕಾಮಗಾರಿಯನ್ನು ಕೈಗೆತ್ತಿಕೊಳ್ಳಬೇಕಿದೆ.<br><br>AHP-ULB(ಸ್ಥಳೀಯ ಸಂಸ್ಥೆ)ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಒಟ್ಟು 2,701 ಮನೆಗಳ ಪೈಕಿ, 1,956 ಮನೆಗಳಿಗೆ ಫಲಾನುಭವಿಗಳು ಆಯ್ಕೆಯಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಉಳಿದ 745 ಮನೆಗಳಿಗೆ ಫಲಾನುಭವಿಗಳ ಆಯ್ಕೆ ಬಾಕಿಯಿರುತ್ತದೆ.<br><br>ಎ.ಎಚ್.ಪಿ ಯೋಜನೆಗಳಡಿ, "ಫಲಾನುಭವಿಗಳ ವಂತಿಕೆ" ಪಾವತಿಸುವ ಫಲಾನುಭವಿಗಳಿಗೆ ಮನೆಗಳನ್ನು ಹಂಚಿಕೆ ಮಾಡಲಾಗುವುದು. |
| (ಆ) | ರಾಜೀವ್ ಗಾಂಧಿ ವಸತಿ ನಿಗಮದ ಮೂಲಕ ಜಾರಿಯಾಗಿರುವ ವಸತಿ ಯೋಜನೆಗಳ ಫಲಾನುಭವಿಗಳು ವಾರ್ಷಿಕ ಆದಾಯ ರೂ.52,000/- ಮತ್ತು ಬಿ.ಪಿ.ಎಲ್ ಪಡಿತರ ಚೀಟಿ ಹೊಂದಿರಬೇಕೆಂದು ಷರತ್ತು ವಿಧಿಸಲಾಗಿದೆಯೇ? | ರಾಜೀವ್ ಗಾಂಧಿ ವಸತಿ ನಿಗಮದ ಮೂಲಕ ಜಾರಿಯಲ್ಲಿರುವ ರಾಜ್ಯ ಸರ್ಕಾರದ ವಸತಿ ಯೋಜನೆಗಳ ಫಲಾನುಭವಿಗಳಿಗೆ ಪ್ರಸ್ತುತ ವಾರ್ಷಿಕ ಆದಾಯದ ಗರಿಷ್ಠ ಮಿತಿಯು ಗ್ರಾಮೀಣ ಪ್ರದೇಶದಲ್ಲಿ ರೂ.32,000/- ಹಾಗೂ ನಗರ ಪ್ರದೇಶಗಳಲ್ಲಿ ರೂ. 87,600/ ಗಳು ಆಗಿರುತ್ತದೆ.<br><br>ರಾಜ್ಯ ಸರ್ಕಾರದ ವಸತಿ ಯೋಜನೆಗಳಡಿ ಗ್ರಾಮೀಣ ಪ್ರದೇಶದಲ್ಲಿ ಆದಾಯ ಮಿತಿಯನ್ನು ರೂ.1.20 ಲಕ್ಷಗಳಿಗೆ ಹೆಚ್ಚಿಸಲು ಹಾಗೂ ನಗರ ಪ್ರದೇಶದಲ್ಲಿ ಆದಾಯ ಮಿತಿಯನ್ನು ರೂ. 3.00 ಲಕ್ಷಗಳಿಗೆ ಹೆಚ್ಚಿಸಲು ಪರಿಶೀಲನೆಯಲ್ಲಿರುತ್ತದೆ.<br><br>ಕೇಂದ್ರ ಸರ್ಕಾರವು ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಅಭಿಯಾನದಡಿ ನಗರ ಪ್ರದೇಶದಲ್ಲಿ ಕುಟುಂಬದ ವಾರ್ಷಿಕ ಆದಾಯದ ಮಿತಿಯನ್ನು ರೂ. 3.00 ಲಕ್ಷ ಎಂದು ನಿಗದಿಪಡಿಸಿದೆ.<br><br>ಒಂದೇ ಕುಟುಂಬವು ಒಂದಕ್ಕಿಂತ ಹೆಚ್ಚು ಬಾರಿ ವಸತಿ ಯೋಜನೆಯ ಪ್ರಯೋಜನ ಪಡೆಯುವುದನ್ನು ತಡೆಹಿಡಿಯುವ ಉದ್ದೇಶದಿಂದ ಬಿ.ಪಿ.ಎಲ್ ಪಡಿತರ ಚೀಟಿ ಹೊಂದಿರಬೇಕೆಂದು ಷರತ್ತು ವಿಧಿಸಲಾಗಿದೆ. |

ಸಂಖ್ಯೆ: ವಇ 66 ಹೆಚ್‌ಎಫ್‌ಎ 2022]

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು